## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 67

ಮಾನ್ಯ ಸದಸ್ಯರ ಹೆಸರು : ಶ್ರೀ.ವಿಜಯ್ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 21-09-2020

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯಲ್ಲಿ ಕೋವಿಡ್-19 ಸೋಂಕಿನಿಂದಾಗಿ ಸಾವನ್ನಪ್ಪಿರುವವರ ಸಂಖ್ಯೆ ಎಷ್ಟು; ಕೊವಿಡ್-19 ನಿಯಂತ್ರಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಬೀದರ್ ಜಿಲ್ಲೆಯಲ್ಲಿ ಕೋವಿಡ್-19 ಸೋಂಕಿನಿಂದ ಇಲ್ಲಿಯವರೆಗೆ ಒಟ್ಟು 149 ಜನರು ಸಾವನ್ನಪ್ಪಿದ್ದಾರೆ. ಕೋವಿಡ್-19 ಸೋಂಕಿನ ನಿಯಂತ್ರಣಕ್ಕೆ ಕೈಗೊಂಡಿರುವ ಕ್ರಮಗಳು:<br>1. ಪ್ರಾಥಮಿಕ ಮತ್ತು ದ್ವಿತೀಯ ಸಂಪರ್ಕ ಹೊಂದಿರುವ ವ್ಯಕ್ತಿಗಳನ್ನು ಪ್ರತ್ಯೇಕವಾಗಿರಿಸಲಾಗುತ್ತಿದೆ ಮತ್ತು ತ್ವರಿತವಾಗಿ ಪರೀಕ್ಷೆ ಮೂಲಕ ಪತ್ತೆ ಹಚ್ಚಲಾಗುತ್ತಿದೆ.<br>2. ಕೋವಿಡ್-19 ಸಕ್ರಿಯ ಪ್ರಕರಣಗಳನ್ನು ಆಸ್ಪತ್ರೆಗಳಲ್ಲಿ ಇರಿಸಿ ಸೂಕ್ತ ಚಿಕಿತ್ಸೆ ನೀಡಲಾಗುತ್ತಿದೆ.<br>3. ಸಮೀಕ್ಷೆಯ ಮೂಲಕ ಪತ್ತೆ ಹಚ್ಚಿರುವ ಮಾರಕ ರೋಗದೊಂದಿಗೆ ಕೋವಿಡ್ ಸೋಂಕಿತರಾಗಿರುವ ವ್ಯಕ್ತಿಗಳಿಗೆ ಚಿಕಿತ್ಸೆ ಒದಗಿಸಲಾಗುತ್ತಿದೆ.<br>4. ರೋಗಿಯ ಮನೆ ಮತ್ತು ಪರಿಸರಕ್ಕೆ ಸೋಂಕು ನಿವಾರಕ ದ್ರಾವಣ ಸಿಂಪಡಿಸಿ, ಸೋಂಕು ನಿವಾರಣೆಗೊಳಿಸಲಾಗುತ್ತಿದೆ.<br>5. ಸಭೆ ಸಮಾರಂಭಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಗುಂಪುಗೂಡದಂತೆ ನಿರ್ಬಂಧಿಸಲಾಗಿದೆ.<br>6. ಮುಂಜಾಗ್ರುತಾ ಕ್ರಮವಾಗಿ ಆರೋಗ್ಯ ತಪಾಸಣೆ ನಡೆಸಲು ಫೀವರ್ ಕ್ಲಿನಿಕ್ ಗಳನ್ನು ಸ್ಥಾಪಿಸಲಾಗಿದೆ.<br>7. ಸಾರ್ವಜನಿಕರಿಗೆ ಆರೋಗ್ಯ ಶಿಕ್ಷಣ ಕುರಿತು IEC (ಮಾಹಿತಿ,ಶಿಕ್ಷಣ & ಸಂವಹನ) ಸಾಮಗ್ರಿಗಳನ್ನು ಒದಗಿಸಲಾಗುತ್ತಿದೆ. ಆರೋಗ್ಯ ಶಿಕ್ಷಣ ಕುರಿತು ಸಮೂಹ ಮಾಧ್ಯಮದ ಮುಖೇನ ಜಾಗೃತಿ ಮೂಡಿಸಲಾಗುತ್ತಿದೆ.<br>8. ಜಿಲ್ಲೆಯಲ್ಲಿ ಆರೋಗ್ಯ ಸಿಬ್ಬಂದಿಯವರಿಗೆ ಸಾಕಷ್ಟು ಪ್ರಮಾಣದಲ್ಲಿ ಸ್ಯಾನಿಟೈಜರ್, ಮಾಸ್ಕ್ ಮತ್ತು ಪಿಪಿಇ ಕಿಟ್‌ಗಳನ್ನು ನೀಡಲಾಗಿದೆ.<br>9. ನ್ಯಾಯಾಲಯದ ಕಲಾಪ ಆರಂಭವಾಗಿರುವುದರಿಂದ ನ್ಯಾಯಾಲಯಕ್ಕೆ ಬರುವ ವ್ಯಕ್ತಿಗಳ ಆರೋಗ್ಯ ತಪಾಸಣೆ ನಡೆಸಲು ಆರೋಗ್ಯ ಇಲಾಖೆಯ ಸಿಬ್ಬಂದಿಗಳ ನಿಯೋಜನೆ ಮಾಡಲಾಗಿದೆ. |
| ಆ | ಜಿಲ್ಲೆಯ ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುತ್ತಿರುವ ಸೋಂಕಿತರಿಗೆ ಒದಗಿಸುತ್ತಿರುವ ಸೌಕರ್ಯಗಳು ಯಾವುವು; | ಸರ್ಕಾರದ ಮಾರ್ಗಸೂಚಿಯನುಸಾರ ಸೋಂಕಿತರಿಗೆ ಔಷದೋಪಚಾರ ಮತ್ತು ಊಟದ ವ್ಯವಸ್ಥೆ ಮಾಡಲಾಗಿದೆ. ಅಗತ್ಯತೆಗೆ ಅನುಸಾರವಾಗಿ ಇತರ ಚಿಕಿತ್ಸೆ ನೀಡಲಾಗುತ್ತಿದೆ. |
| ಇ | ಬೀದರ್ ಜಿಲ್ಲೆಯಲ್ಲಿ ಕೋವಿಡ್-19 ಸಾಂಕ್ರಾಮಿಕ ರೋಗ ಪ್ರಾರಂಭವಾದ ದಿನದಿಂದ ಸರ್ಕಾರ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ? (ತಾಲ್ಲೂಕುವಾರು ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿ ಎನ್.ಹೆಚ್.ಎಂ ವತಿಯಿಂದ ಕೋವಿಡ್-19 ಸಾಂಕ್ರಾಮಿಕ ರೋಗದ ನಿವಾರಣಾ ಕ್ರಮಗಳಿಗೆ 70 ಲಕ್ಷ ರೂ. ಬಿಡುಗಡೆ ಮಾಡಿದ್ದು, ಅದರಲ್ಲಿ 40.47 ಲಕ್ಷ ರೂ. ಖರ್ಚಾಗಿರುತ್ತದೆ. ಜಿಲ್ಲಾಡಳಿತದಿಂದ ರೂ. 610 ಲಕ್ಷಗಳನ್ನು ಖರ್ಚು ಮಾಡಲಾಗಿದೆ. |

ತಾಲ್ಲೂಕುವಾರು ವಿವರ ಕೆಳಕಂಡಂತಿದೆ:

| ತಾಲ್ಲೂಕು | ಎನ್.ಹೆಚ್.ಎಂ ವೆಚ್ಚ(ರೂ.ಗಳಲ್ಲಿ) | | ಜಿಲ್ಲಾಡಳಿತದ ವೆಚ್ಚ (ರೂ.ಗಳಲ್ಲಿ) | |
|---|---|---|---|---|
| | ತಾಲ್ಲೂಕು ವಾರು | ಕೇಂದ್ರಿಕೃತ | ಮುಂಜಾಗ್ರತಾ ಕ್ರಮಕ್ಕೆ | ಇತರೆ |
| ಬೀದರ | 4,38,000 | 27,94,727 | 73,20,427 | 2,66,55,108 |
| ಬಸವಕಲ್ಯಾಣ | 1,13,858 | | 89,57,817 | |
| ಭಾಲ್ಕಿ | 1,61,992 | | 49,58,277 | |
| ಔರಾದ | 3,30,664 | | 73,40,779 | |
| ಹುಮನಾಬಾದ | 2,07,759 | | 57,78,592 | |
| | 12,52,273 | | 3,43,55,892 | |
| ಒಟ್ಟು | 40,47,000 | | 6,10,11,000 | |
| **ಒಟ್ಟು ಮೊತ್ತ** | **6,50,58,000** | | | |

**ಆಕುಕ 81 ಸಿಜಿಎಂ 2020**

(**ಬಿ.ಶ್ರೀರಾಮುಲು**)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು